# ನಮ್ಮ ಸುತ್ತಲಿನ ಪ್ರಕೃತಿ | ಎಲೆಗಳಿಂದ ಮರಗಳವರೆಗೆ

ನಂದಿನಿ ಶೆಟ್ಟಿ

ಮಕ್ಕಳಲ್ಲಿ ಪ್ರಕೃತಿಯ ಬಗ್ಗೆ ಸಹಜವಾದ ಕುತೂಹಲ ಇರುತ್ತದೆ. ನಾಯಿಗಳು, ಬೆಕ್ಕುಗಳು ಮತ್ತು ಹಸುಗಳ ಜೊತೆ ಅವರು ಖುಷಿಯಾಗಿ ಕಾಲ ಕಳೆಯುವುದನ್ನು ಮತ್ತು ಗಿಡ ಮರಗಳನ್ನು ಆಸಕ್ತಿಯಿಂದ ಗಮನಿಸುವುದನ್ನು ನಾವು ನೋಡಬಹುದು. ದೊಡ್ಡವರಾಗುತ್ತಾ ಹೋದಂತೆ ಅವರ ಈ ಆಸಕ್ತಿಯನ್ನು ಪರಿಸರದ ಬಗೆಗಿನ ಕಾಳಜಿಯಾಗಿ ನಾವು ಮಾರ್ಪಡಿಸಬಹುದು. ಮಾಲಿನ್ಯ ಹಾಗೂ ಪರಿಸರದ ಬಗೆಗಿನ ನಮ್ಮ ನಿರ್ಲಕ್ಷ್ಯದ ಪರಿಣಾಮವಾಗಿ ಜಾಗತಿಕ ತಾಪಮಾನ ದಿನೇದಿನೇ ಹೆಚ್ಚುತ್ತಾ ಹೋಗುತ್ತಿರುವ ಕಾರಣ ಮಕ್ಕಳಲ್ಲಿ ಪ್ರಕೃತಿಯ ಬಗ್ಗೆ ಅರಿವುಂಟು ಮಾಡಬೇಕಾಗಿದೆ. ಆ ಮೂಲಕ ಅವರಲ್ಲಿ ಪರಿಸರದ ಬಗ್ಗೆ ಸಂವೇದನಾಶೀಲತೆಯನ್ನು ಬೆಳೆಸಬೇಕಾಗಿದೆ. ನಮಗೆ ತಿಳಿದಿರುವಂತೆ, ಗ್ರಾಮೀಣ ಪ್ರದೇಶದಲ್ಲಿ ಬೆಳೆದ ಮಕ್ಕಳಿಗೆ ಸಹಜವಾಗಿ ಪ್ರಕೃತಿಯ ಜೊತೆಗೆ ನಂಟು ಇರುತ್ತದೆ ಹಾಗೂ ನಗರ ಪ್ರದೇಶದಲ್ಲಿ ವಾಸಿಸುವ ಮಕ್ಕಳಿಗಿಂತ ಹೆಚ್ಚಿನ ನಿಸರ್ಗದೊಂದಿಗಿನ ಸಹಜ ಬದುಕು ಅವರಿಗೆ ಸಿಕ್ಕಿರುತ್ತದೆ. ದುರದೃಷ್ಟವಶಾತ್, ಮಕ್ಕಳಿಗೆ ಸ್ಮಾರ್ಟ್‌ಫೋನ್‌ಗಳು ಮನರಂಜನೆಯ ಪ್ರಮುಖ ಮೂಲಗಳಾಗಿವೆ. ರಾಷ್ಟ್ರೀಯ ಮಕ್ಕಳ ಹಕ್ಕುಗಳ ರಕ್ಷಣೆ ಆಯೋಗದ (ಎನ್‌ಸಿಪಿಸಿಆರ್) ಪ್ರಕಾರ– ಶೇಕಡಾ 76ರಷ್ಟು ಮಕ್ಕಳು ತಮ್ಮ ಪ್ರಮುಖ ಮನರಂಜನೆಯ ಮೂಲ ಸ್ಮಾರ್ಟ್‌ಫೋನ್‌ಗಳು ಎಂದು ಪರಿಗಣಿಸಿದ್ದಾರೆ. ಅದರ ಪರಿಣಾಮವಾಗಿ, ಪ್ರಕೃತಿಯಲ್ಲಿ ಎಷ್ಟೋ ಆಸಕ್ತಿದಾಯಕ ಮತ್ತು ಕುತೂಹಲಕಾರಿಯಾದ ಕಲಿಯುವಂಥ ಸಂಗತಿಗಳಿವೆ ಎಂಬುದು ಮಕ್ಕಳಿಗೆ ತಿಳಿದೇ ಇಲ್ಲ. ನಾವು ಅವರನ್ನು ಪ್ರಕೃತಿಯ ಕಡೆಗೆ ಸೆಳೆದು ಪರಿಸರ –ಪ್ರಜ್ಞೆಯನ್ನು ಅವರಲ್ಲಿ ಬೆಳೆಸಬೇಕಾಗಿದೆ. ಪ್ರಕೃತಿಯ ಪ್ರತಿ ಅಂಶವೂ ಕುತೂಹಲಕಾರಿಯಾಗಿಯೂ, ಪಾಠಗಳಿಂದಲೂ ತುಂಬಿದ್ದು, ಎಲ್ಲಾ ಪ್ರಾಯದ ಮಕ್ಕಳಿಗೂ ಸೂಕ್ತವಾಗುವ ಹಲವಾರು ಚಟುವಟಿಕೆಗಳನ್ನು ಆಯೋಜಿಸ– ಬಹುದು. ನಾವು 2 ರಿಂದ 5 ನೇ ತರಗತಿಯ ಮಕ್ಕಳಿಗೆ ಹಮ್ಮಿಕೊಂಡಿದ್ದ ಚಟುವಟಿಕೆಗಳ ಬಗ್ಗೆ ಇಲ್ಲಿ ವಿವರಿಸುತ್ತೇನೆ. ಇವುಗಳನ್ನು ಎಲ್ಲಿ ಬೇಕಾದರೂ ಮಕ್ಕಳೊಡನೆ ಮಾಡಬಹುದು.

## ಎಲೆಗಳಿಂದ ಕಲಿಕೆ

ಮಕ್ಕಳು ತಮ್ಮ ಸುತ್ತಮುತ್ತಲಿನ ವಿವಿಧ ಮರಗಳ ಎಲೆಗಳನ್ನು ಸಂಗ್ರಹಿಸಿ ಅವುಗಳನ್ನು ಒಣಗಿಸಿದರು. ನಂತರ, ಸರಳ ಮತ್ತು ಸಂಕೀರ್ಣ ಎನಿಸುವ ಎಲೆಗಳನ್ನು ಪ್ರತ್ಯೇಕಿಸಿ, ಚಾರ್ಟ್‌ಪೇಪರ್‌ನ ಅವುಗಳನ್ನು ಅಂಟಿಸಿ ಭಿತ್ತಿಪತ್ರವನ್ನು ತಯಾರಿಸಿದರು. ಅವರು ಎಲೆಗಳ ಉದ್ದ ಮತ್ತು ಅಗಲವನ್ನು ಅಳೆದು, ವಿವರಗಳನ್ನು ಒಂದು ಗ್ರಾಫ್‌ಹಾಳೆಯ, ಕಾಲಮ್ಮುಗಳಲ್ಲಿ ಬರೆದು, ಅದರಲ್ಲಿ ಅವರು ಕಂಡುಕೊಂಡ ಗಣಿತದ ಅಂಶಗಳನ್ನೂ ದಾಖಲಿಸಿದರು.

## ವಿವಿಧ ಹಣ್ಣುಗಳ ಬೀಜ ಪ್ರಸರಣದ ಕಲಿಕೆ

ಮಕ್ಕಳು ತಮ್ಮ ಶಾಲೆ ಮತ್ತು ಮನೆಗಳ ಸುತ್ತಮುತ್ತಲಿನ ವಿವಿಧ ಮರಗಳ ಒಣಗಿದ ಹಣ್ಣುಗಳನ್ನು ಮತ್ತು ಅವುಗಳ ಬೀಜಗಳನ್ನು ಸಂಗ್ರಹಿಸಿದರು. ಈ ಚಟುವಟಿಕೆಯು ಪ್ರತಿ ಹಣ್ಣು/ಬೀಜದ ರಚನೆ ಮತ್ತು ಅವುಗಳನ್ನು ಸೇವಿಸುವ ಪ್ರಾಣಿ ಪಕ್ಷಿಗಳ ಕುರಿತಾದ ಚರ್ಚೆಯನ್ನು ಹುಟ್ಟುಹಾಕಿತು. ಪ್ರಾಣಿ ಮತ್ತು ಪಕ್ಷಿಗಳು ಹೇಗೆ ಹಣ್ಣು/ ಬೀಜಗಳನ್ನು ಹರಡುತ್ತವೆ ಎಂಬ ಬಗ್ಗೆ ನಾವು ಚರ್ಚಿಸಿದೆವು. ಪ್ರಾಣಿ/ ಪಕ್ಷಿಗಳು ತಿನ್ನದ ಹಣ್ಣು/ಬೀಜಗಳ ವೈಶಿಷ್ಟ್ಯಗಳ ಬಗ್ಗೆಯೂ ನಾವು ಚರ್ಚೆ ಮಾಡಿದೆವು. ಅಲ್ಲದೆ, ಪ್ರಾಣಿಗಳು ಮತ್ತು ಪಕ್ಷಿಗಳ ಮೂಲಕ ಹಾಗೂ ನೀರು ಮತ್ತು ಗಾಳಿಯ ಮೂಲಕ ಬೀಜ ಪ್ರಸರಣವಾಗುವ ಕುರಿತೂ ಚರ್ಚಿಸಿದೆವು. ಬೀಜ ಪ್ರಸರಣದಲ್ಲಿ ಮಾನವನ ಪಾತ್ರದ ಬಗ್ಗೆ ನಾವು ವಿಚಾರ ವಿನಿಮಯ ಮಾಡಿಕೊಂಡೆವು. ಆದ್ದರಿಂದ, ಈ ಚಟುವಟಿಕೆಯಲ್ಲಿ ಜೀವಶಾಸ್ತ್ರವನ್ನೂ ಸ್ವಲ್ಪಮಟ್ಟಿಗೆ ತಿಳಿದುಕೊಂಡಂತಾಯಿತು.

## ಶಾಲಾ ಮೈದಾನದಲ್ಲಿನ ಜೀವಿಗಳನ್ನು ಗಮನಿಸುವುದು

ನಾವು ಚಿಟ್ಟೆಗಳನ್ನು ಗಮನಿಸುವ ಕಾರ್ಯಕ್ರಮವನ್ನು ಹಮ್ಮಿಕೊಂಡೆವು ಮತ್ತು ಶಾಲೆಯ ಸುತ್ತಮುತ್ತ ಎಂಟು ಬಗೆಯ ಚಿಟ್ಟೆಗಳನ್ನು ಪತ್ತೆ ಹಚ್ಚಿದೆವು. ಮಕ್ಕಳು ಅವುಗಳ ಸಾಮಾನ್ಯ ಹೆಸರುಗಳನ್ನು ಬರೆದುಕೊಂಡರು. ನಾವು ಮಕ್ಕಳಿಗೆ ಚಿಟ್ಟೆಗಳ ಜೀವನಚಕ್ರದ ಬಗ್ಗೆ ಹೇಳಿಕೊಟ್ಟೆವು. ಮಕ್ಕಳು ಅದರ ಜೀವನಚಕ್ರದ ಚಿತ್ರ ಬಿಡಿಸಿದರು. ನಂತರ, ಮಕ್ಕಳಿಗೆ ಅವರ ಸುತ್ತಮುತ್ತಲಿನ ಪ್ರದೇಶದಲ್ಲಿ ಬಿದ್ದುಹೋಗಿರುವ ಹಕ್ಕಿಗಳ ಗರಿಗಳನ್ನು, ಹಕ್ಕಿಗಳು ಬಳಸದ ಗೂಡುಗಳನ್ನು, ಸತ್ತ ಕೀಟಗಳನ್ನು, ಚಿಟ್ಟೆಗಳನ್ನು ಮತ್ತು ಪತಂಗಗಳನ್ನು ಹುಡುಕಿ ತರುವಂತೆ ಹೇಳಿದೆವು. ಅವರಿಗೆ ತಮ್ಮ ಪರಿಸರದಲ್ಲಿನ ಈ ಜೀವಿಗಳ ಬಗ್ಗೆ ಮತ್ತು ಇನ್ನಷ್ಟು ಸಾಮಾನ್ಯ ಜೀವ ಪ್ರಭೇದಗಳ ಬಗ್ಗೆ ತಿಳಿದುಕೊಳ್ಳಲು ಸಹಾಯಕವಾಯಿತು.

## ಮರಗಳ ಬಗ್ಗೆ ತಿಳಿದುಕೊಳ್ಳುವುದು

ಶಾಲೆಯ ಸುತ್ತಮುತ್ತ ಇದ್ದ ಸಾಮಾನ್ಯ ಮರಗಳನ್ನು ಗುರುತಿಸಿದ ಮಕ್ಕಳು ಅವುಗಳ ಹೆಸರುಗಳನ್ನು ಬರೆದರು. ಒಣಗಿಸಲಿಕ್ಕಾಗಿ ನಾವು ಹೂವು, ತೊಗಟೆ, ಎಲೆಗಳು, ಬೀಜಗಳು ಮತ್ತು ಹಣ್ಣುಗಳನ್ನು ಸಂಗ್ರಹಿಸಿದೆವು. ನಾವು ಒಟ್ಟಾರೆ 50ಕ್ಕೂ ಹೆಚ್ಚು ಮರಗಳು ಮತ್ತು ಗಿಡಗಳನ್ನು ಗುರುತಿಸಿದೆವು, ಮಕ್ಕಳು ತಾವು ಸಂಗ್ರಹಿಸಿದ ವಸ್ತುಗಳ ಚಿತ್ರಗಳನ್ನು ಬಿಡಿಸಿದರು.

## ನಾವು ಕಲಿತದ್ದು

ಮಕ್ಕಳು ಬಹಳ ಉತ್ಸಾಹದಿಂದ ಈ ಚಟುವಟಿಕೆಗಳಲ್ಲಿ ಪಾಲ್ಗೊಂಡರಲ್ಲದೆ, ಸ್ವತಃ ಸಾಕಷ್ಟು ಕೆಲಸಗಳನ್ನು ಮಾಡಿದರು. ಉದಾಹರಣೆಗೆ, ತಾವೇ ಸಂಗ್ರಹಿಸಿದ ಒಣಗಿದ ಎಲೆಗಳಿಂದ ಸ್ವತಃ ಭಿತ್ತಿಪತ್ರ ತಯಾರಿಸಿದರು. ಹಕ್ಕಿಗಳ ಪುಕ್ಕಗಳನ್ನು (ಕಾಗೆ, ಪಾರಿವಾಳ ಮತ್ತು ಕೋಳಿ), ಹಲ್ಲಿಗಳ ಒಡೆದ ತತ್ತಿಗಳನ್ನು, ಮಿಡತೆಗಳು ಕಳಚಿದ ಪೊರೆಗಳನ್ನು ಸಂಗ್ರಹಿಸಿದರು. ನಿತ್ಯಮಲ್ಲಿಗೆ ಗಿಡಗಳಲ್ಲಿರುವ ಹಸಿರು ಪತಂಗದ ಕಂಬಳಿಹುಳ (larvae of Oleander Hawkmoth) ವನ್ನೂ ಹುಡುಕಾಡಿದರಲ್ಲದೆ, ಕಂಬಳಿಹುಳಗಳನ್ನು ಪೋಷಿಸಿ ಅವುಗಳಿಂದ ಹೊರಬಂದ ಪತಂಗಗಳನ್ನು ನಮಗೆ ತೋರಿಸಿದರು. ಹರಳಿನ ಗಿಡದಲ್ಲಿ ಕಂಡುಬಂದ ಚಿಟ್ಟೆಗಳ ಲಾರ್ವಾದಿಂದ ಪರಿಪೂರ್ಣವಾಗಿ ಬೆಳೆದ ಚಿಟ್ಟೆಗಳನ್ನು ಕೂಡಾ ನಾವು ನೋಡಿದೆವು.

## ಇಂತಹ ಚಟುವಟಿಕೆಗಳಿಂದ ನಾವು ಸಾಧಿಸುವುದೇನು?

ಇಂತಹ ಚಟುವಟಿಕೆಗಳಿಂದ, ಪ್ರಕೃತಿ ಎಂಬುದು ಎಷ್ಟು ಅಚ್ಚರಿಗಳ ಆಗರ ಎಂಬುದು ಮಕ್ಕಳಿಗೆ ಅರ್ಥವಾಗುವ ಕಾರಣ ಅವರ ಆಸಕ್ತಿ ಮತ್ತು ಕುತೂಹಲವನ್ನು ನಾವು ಪೋಷಿಸಬಹುದು. ಯಾಕೆಂದರೆ, ಈ ಅರ್ಥೈಸುವಿಕೆಯಿಂದಾಗಿ ಅವರು ತಮ್ಮ ಸುತ್ತಮುತ್ತಲಿನ ಎಲ್ಲಾ ಜೀವಿಗಳನ್ನು ಸೂಕ್ಷ್ಮವಾಗಿ ಗಮನಿಸಲು ಶುರು ಮಾಡುತ್ತಾರೆ. ಮರಗಳ ಮೌಲ್ಯ ಮತ್ತು ಪ್ರತಿಯೊಂದು ಮರವೂ ಪೋಷಿಸುವ ಜೀವಿಗಳ ಬಗ್ಗೆ ಅರಿಯುವುದು ಮತ್ತೊಂದು ದೊಡ್ಡ ಕಲಿಕೆಯಾಗಿದೆ. ಆದಾಗ್ಯೂ, ಮಕ್ಕಳಿಗೆ ದಕ್ಕುವ ಬಹುಮುಖ್ಯ ಕಲಿಕೆ ಏನೆಂದರೆ, ಎಲ್ಲಾ ಜೀವಿಗಳ ನಡುವಿನ ಪರಸ್ಪರ ಅವಲಂಬನೆ. ಮುಖ್ಯವಾಗಿ, ಮಾನವ ಬದುಕಬೇಕಾದರೆ ಇತರ ಎಲ್ಲಾ ಜೀವಿಗಳ ಮೇಲೆ ಮತ್ತು ಪ್ರಾಕೃತಿಕ ಸಂಪನ್ಮೂಲದ ಮೇಲೆ ಅವಲಂಬಿತನಾಗಲೇಬೇಕು ಎಂಬುದು. ಹಾಗೆಯೇ, ಪ್ರತಿಯೊಂದು ಜೀವಿಗೂ ಭೂಮಿಯ ಮೇಲೆ ಬದುಕಲು ಮನುಷ್ಯನಷ್ಟೇ ಹಕ್ಕು ಇದೆ ಎಂಬುದೂ ಅವರಿಗೆ ಅರ್ಥವಾಗುತ್ತದೆ. ಅಂತಿಮವಾಗಿ, ನಮ್ಮ ಸುತ್ತಮುತ್ತಲಿನ ಪರಿಸರವನ್ನು ಕಾಪಾಡಲು ಮತ್ತು ಸಂರಕ್ಷಿಸಲು ಅದು ಅವರಿಗೆ ನೆರವಾಗುತ್ತದೆ.

## ನೋಡುವ ರೀತಿಯಲ್ಲಿ ಬದಲಾವಣೆ

ಈ ಚಟುವಟಿಕೆಗಳು ಮಕ್ಕಳನ್ನು ಹೆಚ್ಚು ಜಾಗೃತರನ್ನಾಗಿಸಿದವು. ಉದಾಹರಣೆಗೆ, ಗಿಡ–ಮರಗಳಲ್ಲಿ ಅವರು ಕೀಟಗಳು ಮತ್ತು ಮೊಟ್ಟೆಗಳನ್ನು ಹುಡುಕಲಾರಂಭಿಸಿದರು. ಅವುಗಳನ್ನು ನನಗೆ ತೋರಿಸಿ, ಅವುಗಳ ಹೆಸರುಗಳನ್ನು ತಿಳಿದುಕೊಳ್ಳಲು ನನ್ನ ನೆರವು ಕೋರಿದರು. ಶಾಲೆಯ ಹತ್ತಿರದ ಗಿಡಗಳಲ್ಲಿ ಲಾರ್ವಾ (ಕೋಶದಿಂದ ಹೊರಬಂದ ಹುಳ/ಕಂಬಳಿಹುಳ) ಕಂಡುಬಂದರೆ, ಅವುಗಳನ್ನು ಕಾಗದದ ಪೆಟ್ಟಿಗೆಗಳಲ್ಲಿರಿಸಿ ಅವುಗಳಿಗೆ ಆಹಾರವಾಗಿ ಎಲೆಗಳನ್ನು ಒದಗಿಸಿದರು. ಮುಂದೆ ಅವು ಪೊರೆ ಕಳಚಿ/ಕೋಶಗಳಿಂದ (cocoon) ಪತಂಗ ಹೊರಬರುವುದನ್ನು ಕೂಡಾ ತೋರಿಸಿದರು. ಈಗ ಮಕ್ಕಳು ಅವರ ಪರಿಸರದಲ್ಲಿನ ಎಲೆಗಳು, ಹೂವುಗಳು ಮತ್ತು ಹಣ್ಣುಗಳನ್ನು ತಂದು ಅವುಗಳ ಹೆಸರುಗಳನ್ನು ನನ್ನಲ್ಲಿ ಕೇಳಿ, ಒಣಗಿಸುವಂತೆ ನನಗೆ ಕೊಡುತ್ತಾರೆ. ಅಲ್ಲದೆ, ತಾವೇ ಗಿಡ, ಮರಗಳ ವಿವರ ತಿಳಿದುಕೊಳ್ಳಲು ಪುಸ್ತಕಗಳ ಮೊರೆಹೋಗುತ್ತಾರೆ, ಅವುಗಳ ಹೆಸರು ನೆನಪಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಈಗ ಅವರು ಶಾಲೆಯ ಆವರಣದಲ್ಲಿರುವ ಎಲ್ಲಾ ಮರಗಳನ್ನು ಗುರುತಿಸಬಲ್ಲರು.

ಶಾಲಾ ಆವರಣದಲ್ಲಿರುವ ಗಿಡಗಳನ್ನು ಕಾಪಾಡಲು ಈಗ ಅವರು ಆಸಕ್ತಿ ವಹಿಸುತ್ತಾರೆ. ಯಾರಾದರೂ ಎಲೆ ಕೀಳಲು ಹೋದರೆ ಅವರು ಆಕ್ಷೇಪಿಸುತ್ತಾರೆ. ತಾವೇ ಎಲೆ ಸಂಗ್ರಹಿಸುವ ಸಂದರ್ಭದಲ್ಲಿಯೂ ಎಷ್ಟು ಬೇಕೋ ಅಷ್ಟೇ ಎಲೆಗಳನ್ನು ಸಂಗ್ರಹಿಸುತ್ತಾರೆ.

ಈ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಪಾಠಗಳಲ್ಲಿ ಯಾವುದೇ ಮಾಹಿತಿ ಬಂದರೂ ಅದನ್ನು ಕಲಿಯಲು ಅವರು ಹೆಚ್ಚು ಉತ್ಸುಕರಾಗಿರುವುದನ್ನು ನಾನು ಗಮನಿಸಿದ್ದೇನೆ. ಈಗ ಅವರು ಸರಳ ಮತ್ತು ಸಂಕೀರ್ಣ ಎಲೆಗಳನ್ನು ಪ್ರತ್ಯೇಕಿಸಬಲ್ಲರು; ಎಲೆಗಳ ಭಾಗಗಳನ್ನು ಗುರುತಿಸಬಲ್ಲರು; ಅವರೀಗ ಕತೆ ಹೇಳುವ ರೀತಿಯಲ್ಲಿ, ಕೀಟಗಳ ಜೀವನಚಕ್ರವನ್ನು ವಿವರಿಸಬಲ್ಲರು.

ಈ ಚಟುವಟಿಕೆಯನ್ನು ನಾನು ಆರಂಭಿಸಿದಾಗ ಎಲ್ಲಾ ಮಕ್ಕಳಿಗೆ ಅದರಲ್ಲಿ ಸಂಪೂರ್ಣ ಆಸಕ್ತಿಯೇನೂ ಇರಲಿಲ್ಲ. ನಾವು ಮುಂದುವರಿದಂತೆ, ಹೆಚ್ಚುಹೆಚ್ಚು ಮಕ್ಕಳು ಉಮೇದಿನಿಂದ ಪಾಲ್ಗೊಂಡರು. ಆಸಕ್ತಿ ಇರುವ ಎಲ್ಲಾ ಮಕ್ಕಳನ್ನೂ ಈ ಎಲ್ಲಾ ಚಟುವಟಿಕೆಗಳಲ್ಲಿ ಸೇರಿಸಿಕೊಳ್ಳಬಹುದು. ಅವರಿಗೆ ಸಾಧ್ಯವಿರುವಷ್ಟರ ಮಟ್ಟಿಗೆ ಅದರಲ್ಲಿ ಅವರು ಭಾಗವಹಿಸುತ್ತಾರೆ. ಈ ಕಲಿಕೆಗಳ ಬಗ್ಗೆ 2 ಮತ್ತು 3ನೇ ತರಗತಿಯ ಮಕ್ಕಳಿಗೆ ಅವರ ಸಾಮರ್ಥ್ಯಕ್ಕೆ ಅನುಗುಣವಾಗಿ ಬರೆಯಲು ಹೇಳಬಹುದು.

## ಕೆಲವು ಸಲಹೆಗಳು

ಮಕ್ಕಳು ಚಿತ್ರಗಳನ್ನು ನೋಡಲು ಇಷ್ಟಪಡುವ ಕಾರಣ ಚಿಟ್ಟೆಗಳು, ಪತಂಗಗಳು, ಮರಗಳು ಮತ್ತು ಹಕ್ಕಿಗಳನ್ನು ಗುರುತಿಸಲು ಬಣ್ಣದ ಚಿತ್ರಗಳುಳ್ಳ ಪುಸ್ತಕಗಳನ್ನು ಬಳಸುವುದು ಉತ್ತಮ. ಪ್ರಾಣಿಗಳು, ಕೀಟಗಳು, ಹಕ್ಕಿಗಳು, ಪತಂಗಗಳು ಮತ್ತು ಚಿಟ್ಟೆಗಳ ಚಿತ್ರಗಳನ್ನು ಸೂಕ್ಷ್ಮವಾಗಿ ಗಮನಿಸಿ, ಹೆಸರುಗಳನ್ನು ನೋಡುತ್ತಾರೆ ಮತ್ತು ಇದೊಂದು ಉತ್ತಮ ಅಭ್ಯಾಸವಾಗುತ್ತದೆ. ಪುಸ್ತಕಗಳು ಲಭ್ಯವಿಲ್ಲದಿದ್ದರೆ, ನಮ್ಮ ಮೊಬೈಲ್‌ಫೋನ್ ಅಥವಾ ಕಂಪ್ಯೂಟರ್‌ನಲ್ಲಿ ಆ ಚಿತ್ರಗಳನ್ನು ತೋರಿಸಬಹುದು. ಸೂಕ್ಷ್ಮದರ್ಶಕ (ಮೈಕ್ರೊಸ್ಕೋಪ್) ಲಭ್ಯವಿಲ್ಲದಿದ್ದರೆ ಭೂತಗನ್ನಡಿಯನ್ನು ಬಳಸಬಹುದು. ಮಕ್ಕಳು ಪರಿಸರವನ್ನು ಗೌರವಿಸುವಂತೆ ಮಾಡಲು ಶಿಕ್ಷಕರಾಗಿ ನಮಗೆ ಸಿಗುವ ಪ್ರತಿಯೊಂದು ಅವಕಾಶವನ್ನೂ ನಾವು ಸದುಪಯೋಗ–ಪಡಿಸಿಕೊಳ್ಳಬೇಕು. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ

ಪರಿಸರ ಪ್ರಜ್ಞೆಯನ್ನು (eco-consciousness) ಮೂಡಿಸುವುದಲ್ಲದೆ, ಗಮನಿಸುವುದು, ಅನ್ವೇಷಿಸುವುದು, ಚಿತ್ರದೊಂದಿಗೆ ವಿವರಿಸುವುದು, ಯೋಚಿಸುವುದು, ಪ್ರಶ್ನಿಸುವುದು ಮತ್ತು ತಾರ್ಕಿಕ ಕಾರಣ ನೀಡುವುದು ಮುಂತಾದ ಹಲವಾರು ವೈಜ್ಞಾನಿಕ ಪರಿಣತಿಯನ್ನೂ ಅವರಲ್ಲಿ ಬೆಳೆಸುತ್ತದೆ. ಸ್ವಂತ ಅನುಭವದ ಮೂಲಕ ತಿಳಿವಳಿಕೆಯನ್ನು ಹೆಚ್ಚಿಸಿ–ಕೊಳ್ಳುವಂತೆಯೂ ಮಕ್ಕಳನ್ನು ಇದು ಪ್ರೇರೇಪಿಸುತ್ತದೆ.

ಎನ್‌ಸಿಎಫ್(2005) ಶಿಫಾರಸ್ಸಿನಂತೆ, ಮಕ್ಕಳಿಗೆ ಪರಿಸರದ ಬಗ್ಗೆ ಜಾಗೃತಿ ಮೂಡಿಸಬೇಕಾದರೆ ಪಠ್ಯಪುಸ್ತಕದಲ್ಲಿ ಕೊಡಲಾದ ಪಾಠಗಳಿಂದಾಚೆ ಮಕ್ಕಳನ್ನು ಕರೆದೊಯ್ಯಬೇಕು. ನಮ್ಮಿಂದ ಎಷ್ಟು ಸಾಧ್ಯವೋ ಅಷ್ಟು ಅವಕಾಶಗಳನ್ನು ಸೃಷ್ಟಿಸುವ ಮೂಲಕ ಅವರನ್ನು ಜವಾಬ್ದಾರಿಯುತ, ಪ್ರಕೃತಿಪ್ರಿಯ ನಾಗರಿಕರಾಗಿ ಬೆಳೆಯುವಂತೆ ಮಾಡಬಹುದು.



**ನಂದಿನಿ ಶೆಟ್ಟಿ** ಅವರು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ ಸಂಪನ್ಮೂಲ ವ್ಯಕ್ತಿಯಾಗಿದ್ದು, ಬೆಂಗಳೂರು ನಗರದ ಸರ್ಕಾರಿ ಶಾಲೆಗಳೊಂದಿಗೆ ಕೆಲಸ ಮಾಡುತ್ತಿದ್ದಾರೆ. ಬೆಂಗಳೂರಿನ ಜವಾಹರಲಾಲ್ ನೆಹರೂ ಸೆಂಟರ್ ಫಾರ್ ಅಡ್ವಾನ್ಸ್ಡ್ ಸೈಂಟಿಫಿಕ್ ರಿಸರ್ಚ್‌ನಿಂದ ((JNCASR)) ಪಿಹೆಚ್.ಡಿ. ಪದವಿ ಪಡೆದಿದ್ದಾರೆ. ಅವರನ್ನು nandini.shetty@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ರೋಹಿಣಿ ಮುಂಡಾಜೆ** | ಪರಿಶೀಲನೆ: **ನಾಗಮಣಿ ಎಸ್.ಎನ್.**